ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತೆರಡನೆಯ ಅಧಿವೇಶನ
ಗುರುವಾರ, ದಿನಾಂಕ : 10 ನೇ ಡಿಸೆಂಬರ್, 2020

ಆರ್ಥಿಕ ಇಲಾಖೆಯ ಮಿತವ್ಯಯದ ಆದೇಶವನ್ನು ಹಿಂಪಡೆಯುವ ಬಗ್ಗೆ

ಶ್ರೀ ಅರುಣ ಶಹಾಪುರ(ಶಿಕ್ಷಕರ ಕ್ಷೇತ್ರ) –

272 (401) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಅನುದಾನಿತ ಪ್ರಾಥಮಿಕ, ಪ್ರೌಢ ಶಾಲೆ ಹಾಗೂ ಪದವಿ ಪೂರ್ವ ಹಾಗೂ ಪದವಿ ಕಾಲೇಜುಗಳಲ್ಲಿ ಖಾಲಿ ಹುದ್ದೆ ಭರ್ತಿ ಮಾಡುವ ಕುರಿತಂತೆ ಆರ್ಥಿಕ ಇಲಾಖೆಯು ಆರ್ಥಿಕ ಮಿತವ್ಯಯದ ಆದೇಶ ಹೊರಡಿಸಿ ಹುದ್ದೆ ಭರ್ತಿ ಮಾಡುವುದನ್ನು ತಡೆಹಿಡಿಯಲಾಗಿದೆಯೇ; ಹಾಗಿದ್ದಲ್ಲಿ, ಎಂದಿನಿಂದ ತಡೆಹಿಡಿಯಲಾಗಿದೆ; (ಆದೇಶದ ಪ್ರತಿ ಒದಗಿಸುವುದು)

(ಆ) ಈಗಾಗಲೇ ಆರ್ಥಿಕ ಇಲಾಖೆಯು ಅನುಮತಿ ನೀಡಿರುವ ಹುದ್ದೆಗಳಿಗೆ ಅನುದಾನ ಒದಗಿಸಲು ಸರ್ಕಾರಕ್ಕಿರುವ ತೊಂದರೆ ಏನು;

(ಇ) ಈ ಆದೇಶದಿಂದ ಅನುದಾನಿತ ವ್ಯವಸ್ಥೆಯ ಎಲ್ಲ ನೌಕರರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಈ) ಈ ಆರ್ಥಿಕ ಮಿತವ್ಯಯದ ಆದೇಶವನ್ನು ಹಿಂಪಡೆಯುವಂತೆ ಶಾಸಕರ ಒತ್ತಡಗಳು ಮುಖ್ಯಮಂತ್ರಿಗಳಿಗೆ ಬಂದಿವೆಯೇ; (ಪ್ರತಿಯೊಂದು ಪತ್ರದ ವಿವರ ಹಾಗೂ ಪ್ರಸ್ತಾವನೆಗಳ ವಿವರವನ್ನು ಒದಗಿಸುವುದು)

(ಉ) ಮುಖ್ಯಮಂತ್ರಿಗಳ ಷರಾ ಸಹಿತ ಕಡತವು ಯಾವ ಹಂತದಲ್ಲಿದೆ;

(ಊ) ಆರ್ಥಿಕ ಇಲಾಖೆಯು ಅನುಮತಿ ನೀಡಿ ಹುದ್ದೆ ಭರ್ತಿ ಮಾಡಲು ಸಹ ಅನುಮತಿ ನೀಡಿರುವ ಕಡತಗಳಿಗೆ ವೇತನ ಒದಗಿಸಲು ಸರ್ಕಾರ ಆರ್ಥಿಕ ಇಲಾಖೆ ಮುಂದಾಗುವುದೇ; ಆರ್ಥಿಕ ಮಿತವ್ಯಯದ ಆದೇಶವನ್ನು ಯಾವಾಗ ಹಿಂಪಡೆಯಲಾಗುವುದು?